# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 145(116)
2. ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್)
3. ಉತ್ತರಿಸುವ ದಿನಾಂಕ : 21-09-2020
4. ಉತ್ತರಿಸುವ ಸಚಿವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನಂಜನಗೂಡು ಬಳಿ ಇರುವ ರೀಡ್ ಅಂಡ್ ಟೇಲರ್ ಕಾರ್ಖಾನೆ ಮುಚ್ಚಿದ್ದು, ಕಾರ್ಮಿಕರು ಬೀದಿಪಾಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಎಷ್ಟು ಜನ ಕಾರ್ಮಿಕರು ಕೆಲಸ ಕಳೆದುಕೊಂಡಿದ್ದಾರೆ; | ಹೌದು. 2012-13 ನೇ ಸಾಲಿನಿಂದ ಸತತ ಆರ್ಥಿಕ ನಷ್ಟ ಹಾಗೂ ಯಾವುದೇ ಬ್ಯಾಂಕ್ ಅಥವಾ ಹಣಕಾಸು ಸಂಸ್ಥೆಗಳಿಂದ ಆರ್ಥಿಕ ನೆರವು ಸಿಗದೇ ಇರುವ ಕಾರಣ ಸಂಸ್ಥೆಯು ತನ್ನ ಕಾರ್ಯಚಟುವಟಿಕೆಗಳನ್ನು ಸ್ಥಗಿತಗೊಳಿಸಿರುತ್ತದೆ. ಇದರಿಂದಾಗಿ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ 984 ಜನ ಕಾರ್ಮಿಕರು ಕೆಲಸ ಕಳೆದುಕೊಂಡಿರುತ್ತಾರೆ. |
| ಆ | ಈ ಬಗ್ಗೆ ಕಾರ್ಮಿಕ ಸಚಿವರು, ಜಿಲ್ಲಾ ಸಚಿವರು, ಜಿಲ್ಲಾಧಿಕಾರಿಯವರು, ಕಾರ್ಖಾನೆಯ ಲಿಕ್ವಿಡೇಟರ್ ಜೊತೆ ಮಾತುಕತೆ ನಡೆಸಿದ್ದಾರೆಯೇ; ಇದರ ಫಲಶ್ರುತಿಗಳೇನು; ಕಾರ್ಮಿಕರಿಗೆ ಸೂಕ್ತ ನ್ಯಾಯ ದೊರಕಿಸಿಕೊಡಲು ಕ್ರಮ ತೆಗೆದುಕೊಳ್ಳಲಾಗುವುದೇ; | ಹೌದು. ದಿನಾಂಕ: 28-05-2020 ರಂದು ಬೆಂಗಳೂರಿನಲ್ಲಿ ರೀಡ್&ಟೇಲರ್ ಕಾರ್ಖಾನೆಯ ಲಿಕ್ವಿಡೇಟರ್ ಜತೆ ಮಾತುಕತೆ ನಡೆಸಲಾಗಿದೆ. ಸದರಿ ಸಭೆಯಲ್ಲಿ ಮಾನ್ಯ ಮೈಸೂರು ಜಿಲ್ಲಾ ಉಸ್ತುವಾರಿ ಸಚಿವರು,. ಜಿಲ್ಲಾಧಿಕಾರಿಗಳು ಹಾಗೂ ಸ್ಥಳೀಯ ಜನಪ್ರತಿನಿಧಿಗಳ ಹಾಗೂ ಅಧಿಕಾರಿಗಳ ಸಭೆ ನಡೆಸಲಾಗಿದೆ. ಹಾಗೂ ಕಾರ್ಖಾನೆಯನ್ನು ಪುನರಾರಂಭಿಸುವುದು, ವೇತನ ಪಾವತಿ ಮಾಡುವುದು ಹಾಗೂ ಕಾರ್ಮಿಕರನ್ನು ಕೆಲಸದಿಂದ ತೆಗೆದುಹಾಕಿರುವ ಬಗ್ಗೆ ಚರ್ಚೆ ನಡೆದಿರುತ್ತದೆ. ಸಭೆಯಲ್ಲಿ ಹಾಜರಿದ್ದ ಲಿಕ್ವಿಡೇಟರ್ ರವರು ಕಾರ್ಖಾನೆಯನ್ನು ನಡೆಸಲು ಎದುರಿಸುತ್ತಿರುವ ಸಂಕಷ್ಟಗಳು ಹಾಗೂ ಕಾರ್ಖಾನೆ ಪ್ರತಿದಿನ ಅನುಭವಿಸುತ್ತಿರುವ ಆರ್ಥಿಕ ನಷ್ಟ ವಿವರಗಳನ್ನು ನೀಡಿದ್ದು, ಪರಿಸ್ಥಿತಿ ಎಷ್ಟೇ ಗಂಭೀರವಾಗಿದ್ದರೂ ಸಹ ಏಕಪಕ್ಷೀಯ ನಿರ್ಧಾರ ತೆಗೆದುಕೊಂಡು ಕಾರ್ಮಿಕರನ್ನು ಕೆಲಸದಿಂದ ತೆಗೆದು ಹಾಕದಿರಲು, ಲೇಆಫ್ ಮಾಡದಿರುವ ಬಗ್ಗೆ ಸುಧೀರ್ಘವಾಗಿ ಚರ್ಚಿಸಲಾಗಿದೆ. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ಅಧ್ಯಕ್ಷತೆಯಲ್ಲಿ ದಿ:12-06-2020 ರಂದು ರೀಡ್&ಟೇಲರ್ ಆಡಳಿತ ವರ್ಗ, ಲಿಕ್ವಿಡೇಟರ್, ಕಾರ್ಮಿಕ ಸಂಘದ ಪ್ರತಿನಿಧಿಗಳನ್ನೊಳಗೊಂಡಂತೆ ಜಂಟಿ ಸಭೆ ನಡೆದಿರುತ್ತದೆ. ಈ ಸಂಸ್ಥೆಯನ್ನು First Charge Holder ಆದ M/s. Finquest Financial Solutions (P) Ltd., ಅವರು ಖರೀದಿಸಿದ್ದು ದಿನಾಂಕ: 25.06.2020 ರಲ್ಲಿ ಅವರೊಂದಿಗೆ ಖರೀದಿ ಒಪ್ಪಂದ ಆಗಿರುತ್ತದೆ. ತದನಂತರ M/s. Finquest Financial Solutions (P) Ltd., ಇವರು M/s. Krihaan Texchem Pvt.Ltd., ಇವರಿಗೆ ಮಾರಾಟ ಮಾಡಿರುತ್ತಾರೆ. ಸಂಸ್ಥೆಯನ್ನು ಪುನರಾರಂಭಿಸುವ ಬಗ್ಗೆ M/s. Krihaan Texchem Pvt.Ltd., ಅವರು ನಿರ್ಧರಿಸಬೇಕಾಗಿರುತ್ತದೆ. |

...2

| | | |
|---|---|---|
| ಇ | ಸದರಿ ಕಾರ್ಖಾನೆಯನ್ನು ಪುನರ್ ಪ್ರಾರಂಭಿಸುವುದು ಯಾವಾಗ? | ಈ ಕಾರ್ಖಾನೆಯನ್ನು ಆರ್ಥಿಕ ನಷ್ಟದಿಂದಾಗಿ ಮುಚ್ಚಲಾಗಿದ್ದು, ಕಾರ್ಖಾನೆಯನ್ನು ಪ್ರಾರಂಭಿಸುವ ಸಾಧ್ಯಾಸಾಧ್ಯತೆಗಳ ಬಗ್ಗೆ ಲಿಕ್ವಿಡೇಟರ್‌ರವರು ಕ್ರಮ ವಹಿಸಿದ್ದು, ಅವರು ತೆಗೆದುಕೊಳ್ಳುತ್ತಿರುವ ಕ್ರಮಗಳ ಫಲಶೃತಿ ಹಾಗೂ ಕಾರ್ಖಾನೆ ನಡೆಸಲು First Charge Holder ಅನ್ನು ಗುರುತಿಸುವ ಪ್ರಕ್ರಿಯೆ ಪೂರ್ಣಗೊಂಡಿದ್ದು, ಸಂಸ್ಥೆಯನ್ನು ಪುನರಾರಂಭಿಸುವ ಬಗ್ಗೆ M/s. Krihaan Texchem Pvt.Ltd., ಹಾಗೂ ಕಾರ್ಮಿಕ ಸಂಘಟನೆಯೊಂದಿಗೆ ಮಾತುಕತೆ ನಡೆಯುತ್ತಿದ್ದು, ಎಲ್ಲಾ ಭಾಗೀದಾರರ ನಡುವೆ ಒಮ್ಮತ ಮೂಡಿದ ನಂತರ ನಿರ್ಧಾರವಾಗಲಿದೆ. |

ಸಂಖ್ಯೆ: ಕಾಇ 375 ಐಡಿಎಂ 2020

(ಅರಬೈಲ್ ಶಿವರಾಮ್ ಹೆಬ್ಬಾರ್)
ಕಾರ್ಮಿಕ & ಸಕ್ಕರೆ ಸಚಿವರು.